ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯ ಮಾರ್ಗಸೂಚಿಗಳ ಬಗ್ಗೆ ತಿಳುವಳಿಕೆ ನೀಡಲು ಆಯಾ ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರು ಅವರ ವ್ಯಾಪ್ತಿಯ ಇಲಾಖಾಧಿಕಾರಿಗಳ, ಜಿಲ್ಲಾ ಸಹಕಾರ ಬ್ಯಾಂಕ್‌ಗಳ, ಹಾಲು ಉತ್ಪಾದಕರ ಒಕ್ಕೂಟಗಳ ಮತ್ತು ಇತರೆ ಪ್ರಮುಖ ಸಹಕಾರ ಸಂಘ/ಸಂಸ್ಥೆಗಳ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳ ಸಭೆಯನ್ನು ಪ್ರಾಂತೀಯ ಮಟ್ಟದಲ್ಲಿ ನಿರ್ವಹಿಸಲು ಸೂಚಿಸಿದೆ. ನಂತರ ದಿನಾಂಕ 31–3–2015ರೊಳಗೆ ಎಲ್ಲಾ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರುಗಳು ಅವರ ಜಿಲ್ಲೆಯ ಎಲ್ಲಾ ಗ್ರಾಮೀಣ ಸಹಕಾರ ಸಂಘಗಳ ಅಧ್ಯಕ್ಷರ ಮತ್ತು ಕಾರ್ಯದರ್ಶಿಯವರ, ಸ್ವಸಹಾಯ ಗುಂಪು ಮತ್ತು ಸಂಬಂಧಿಸಿದ ಇಲಾಖೆಗಳ ಅಧಿಕಾರಿಗಳ ಸಭೆ ಕರೆದು ಕಾರ್ಯಾಗಾರ ಏರ್ಪಡಿಸಿ ಯೋಜನೆಯ ಮಾರ್ಗಸೂಚಿ ನಿಯಮಗಳು, ಇತಿಮಿತಿಗಳು ಮತ್ತು ಯೋಜನೆಯಿಂದ ಸೌಲಭ್ಯ ಪಡೆಯುವವರ ಬಗ್ಗೆ ಮಾಹಿತಿಯನ್ನು ನೀಡಿ, ತೆಗೆದುಕೊಂಡ ಕ್ರಮದ ಬಗ್ಗೆ ವರದಿಯನ್ನು ಸಹಕಾರ ಸಂಘಗಳ ನಿಬಂಧಕರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ

PR. 226 ಸರ್ಕಾರದ ಉಪ ಕಾರ್ಯದರ್ಶಿ.

SC. 250 ಸಹಕಾರ ಇಲಾಖೆ

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:–** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ತೆರೆಯಲಾಗಿರುವ ಹೊಸ ಪಶುಚಿಕಿತ್ಸಾಲಯಗಳಿಗೆ ಸ್ಥಳ ಗುರುತಿಸುವುದು ಹಾಗೂ ಮೇಲ್ದರ್ಜೆಗೇರಿಸಲಾಗಿರುವ ಪಶು ಚಿಕಿತ್ಸಾಲಯಗಳಿಗೆ ಸಂಸ್ಥೆಗಳನ್ನು ಗುರುತಿಸುವ ಕುರಿತು.

**ಓದಲಾಗಿದೆ:–** 1) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ದಿನಾಂಕ: 24.12.2014

2) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ದಿನಾಂಕ: 04.02.2015

3) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ದಿನಾಂಕ: 09.03.2015

4) ಮಾನ್ಯ ಮುಖ್ಯಮಂತ್ರಿಯವರ ಅನುಮೋದಿತ ಟಿಪ್ಪಣಿ ದಿನಾಂಕ: 12.05.2015

**ಪ್ರಸಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ದಿನಾಂಕ: 24.12.2014 ರನ್ವಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಲಾಗಿದ್ದು, ಸದರಿ ಆದೇಶದನ್ವಯ ಹೊಸದಾಗಿ ತೆರೆಯಲಾಗುವ 75 ಪಶುಚಿಕಿತ್ಸಾಲಯಗಳಿಗೆ ಸ್ಥಳಗಳನ್ನು ಗುರುತಿಸಲಾಗಿದೆ ಹಾಗೂ ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸುವ 69 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಗುರುತಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ದಿನಾಂಕ: 24.12.2014 ರನ್ವಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಲಾಗಿದ್ದು, ಸದರಿ ಆದೇಶದನ್ವಯ ಹೊಸದಾಗಿ ತೆರೆಯಲಾಗುವ 7 ಪಶುಚಿಕಿತ್ಸಾಲಯಗಳಿಗೆ ಸ್ಥಳಗಳನ್ನು ಗುರುತಿಸಲಾಗಿದೆ ಹಾಗೂ ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲಾಗುವ 9 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಗುರುತಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಯವರು ರಾಜ್ಯಾದ್ಯಂತ ತೆರೆಯಲಾಗುವ ಹೊಸ ಪಶುಚಿಕಿತ್ಸಾಲಯಗಳಿಗೆ ಗುರುತಿಸಿರುವ ಸ್ಥಳಗಳ ಪಟ್ಟಿಯನ್ನು ಹಾಗೂ ಮೇಲ್ದರ್ಜೆಗೇರಿಸಲಾಗುವ ಪಶುಚಿಕಿತ್ಸಾಲಯಗಳಿಗೆ ಗುರುತಿಸಿರುವ ಸಂಸ್ಥೆಗಳ ಪಟ್ಟಿಯನ್ನು ಅನುಮೋದಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 2014–15 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014 ದಿನಾಂಕ: 24.12.2014 ರನ್ವಯ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ ತೆರೆಯಲಾಗುವ ಹೊಸ ಪಶುಚಿಕಿತ್ಸಾಲಯಗಳಿಗೆ ಮುಂದುವರೆದು ಸ್ಥಳಗಳನ್ನು ಗುರುತಿಸಲು ಹಾಗೂ ಮೇಲ್ದರ್ಜೆಗೇರಿಸಲಾಗುವ ಪಶುಚಿಕಿತ್ಸಾಲಯಗಳಿಗೆ ಸಂಸ್ಥೆಗಳನ್ನು ಗುರುತಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ಬೆಂಗಳೂರು ದಿನಾಂಕ: 14.05.2015**

ಮೇಲ್ಕಂಡ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014 ದಿನಾಂಕ: 24.12.2014 ರನ್ವಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ರಾಜ್ಯಾದ್ಯಂತ 100 ಹೊಸ ಪಶುಚಿಕಿತ್ಸಾಲಯಗಳನ್ನು ತೆರೆಯಲು ಹಾಗೂ 100 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಮಂಜೂರಾತಿ ನೀಡಲಾಗಿದ್ದು, ಸದರಿ ಆದೇಶದನ್ವಯ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಹೊಸದಾಗಿ ತೆರೆಯಲಾಗುವ 18 ಪಶುಚಿಕಿತ್ಸಾಲಯಗಳಿಗೆ ಇದರೊಂದಿಗೆ ಲಗತ್ತಿಸಿರುವ **ಅನುಬಂಧ–1** ರಲ್ಲಿರುವಂತೆ ಸ್ಥಳಗಳನ್ನು ಗುರುತಿಸಲಾಗಿದೆ ಹಾಗೂ ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲಾಗುವ 22 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು **ಅನುಬಂಧ–2** ರಲ್ಲಿರುವಂತೆ ಗುರುತಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಪ್ರಸನ್ನ**
ಪೀಠಾಧಿಕಾರಿ–2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ)

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ಬೆಂಗಳೂರು, ದಿನಾಂಕ: 14.05.2015 ಕ್ಕೆ ಅನುಬಂಧ–1**

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೊಸದಾಗಿ ಪಶು ಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡುವ ಗ್ರಾಮಗಳ ಹೆಸರು |
|---|---|---|---|
| 1. | ಬಾಗಲಕೋಟೆ | ಬೀಳಗಿ | ಹನಗವಾಡಿ |
| 2. | ಬಾಗಲಕೋಟೆ | ಜಮಖಂಡಿ | ಜಂಬಗಿ ಬಿ. ಕೆ |
| 3. | ಬಾಗಲಕೋಟೆ | ಬಾಗಲಕೋಟೆ | ರಾಂಪೂರ |
| 4. | ಬಳ್ಳಾರಿ | ಹೂವಿನಹಡಗಲಿ | ನಾಗತಿಬಸಾಪುರ |
| 5. | ವಿಜಯಪುರ | ಬಸವನ ಬಾಗೇವಾಡಿ | ಚಿಮ್ಮಲಗಿ |
| 6. | ಬಿಜಾಪುರ | ಮುದ್ದೇಬಿಹಾಳ | ಆಲೂರು |
| 7. | ದಕ್ಷಿಣ ಕನ್ನಡ ಜಿಲ್ಲೆ | ಬಂಟ್ವಾಳ | ಸಿದ್ದನಕಟ್ಟೆ |
| 8. | ಧಾರವಾಡ | ಕುಂದಗೋಳ | ಕಟ್ನೂರು |
| 9. | ಗದಗ | ರೋಣ | ಅಸೂಟಿ |
| 10. | ಕಲಬುರಗಿ | ಅಫ್ಜಲ್‌ಪುರ | ಕವಲಗಾ (ಬಿ) |
| 11. | ಕಲಬುರಗಿ | ಚಿತ್ತಾಪುರ | ಭೀಮಳ್ಳಿ |
| 12. | ಕಲಬುರಗಿ | ಜೇವರ್ಗಿ | ಮಾಗಣಗೇರ |
| 13. | ಹಾವೇರಿ | ಹಾನಗಲ್ | ಶಾಡಗೊಪ್ಪ |
| 14. | ಕೊಪ್ಪಳ | ಯಲ್ಬುರ್ಗಾ | ಬೆಣ್‌ಕಲ್ |
| 15. | ತುಮಕೂರು | ಮಧುಗಿರಿ | ಚಿಕ್ಕಮಾಲೂರು |
| 16. | ಉತ್ತರ ಕನ್ನಡ | ಹಳಿಯಾಳ | ಸಾಮ್ರಾಣಿ |
| 17. | ಬೀದರ್ | ಭಾಲ್ಕಿ | ಹಲಸತಗಾಂವ್ |
| 18. | ದಾವಣಗೆರೆ | ಹರಪನಹಳ್ಳಿ | ಲಕ್ಷ್ಮೀಪುರ |

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 73 ಪಸಸೇ 2014, ಬೆಂಗಳೂರು, ದಿನಾಂಕ: 14.05.2015 ಕ್ಕೆ ಅನುಬಂಧ–2**

**ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರಗಳು/ಕೃ.ಗ.ಉ.ಕೇ ಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಿರುವ ಸ್ಥಳಗಳು**

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಬೇಕಾದ ಸಂಸ್ಥೆಯ ಹೆಸರು |
|---|---|---|---|
| 1. | ಬೆಂಗಳೂರು ನಗರ | ಆನೇಕಲ್ | ಕೃ.ಗ.ಕೇಂ, ಹುಸ್ಕೂರು |
| 2. | ತುಮಕೂರು | ಕುಣಿಗಲ್ | ಪ್ರಾಪಚಿ, ಯಲಿಯೂರು |
| 3. | ಉಡುಪಿ | ಕುಂದಾಪುರ | ಪ್ರಾಪಚಿ, ಕಿರುಮಂಜೇಶ್ವರ |
| 4. | ಬೀದರ್ | ಭಾಲ್ಕಿ | ಪ್ರಾಪಚಿ, ಬಾಳೂರು |

| ಕ್ರ. ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಪಶುಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಬೇಕಾದ ಸಂಸ್ಥೆಯ ಹೆಸರು |
|---|---|---|---|
| 5. | ಬೀದರ್ | ಹುಮ್ನಾಬಾದ್ | ಕೃ.ಗ.ಉ.ಕೇಂ, ಹಳ್ಳಿಖೇಡ್ (ಕೆ) |
| 6. | ವಿಜಯಪುರ | ಮುದ್ದೇಬಿಹಾಳ | ಪ್ರಾಪಚಿ, ತಮದಡ್ಡಿ |
| 7. | ಚಾಮರಾಜ ನಗರ | ಯಳಂದೂರು | ಪ್ರಾಪಚಿ, ಗುಂಬಳ್ಳಿ |
| 8. | ದಕ್ಷಿಣ ಕನ್ನಡ ಜಿಲ್ಲೆ | ಬಂಟ್ವಾಳ | ಪ್ರಾಪಚಿ. ಮಂಚಿ |
| 9. | ಗದಗ | ಗದಗ | ಕೃ.ಗ.ಉ.ಕೇಂ, ಕುರ್ತಕೋಟಿ |
| 10. | ಗದಗ | ಮುಂಡರಗಿ | ಪ್ರಾಪಚಿ, ಹಳ್ಳಿಕೇರಿ |
| 11. | ಗದಗ | ರೋಣ | ಪ್ರಾಪಚಿ, ಹುಲ್ಲೂರ |
| 12. | ಗದಗ | ಶಿರಹಟ್ಟಿ | ಪ್ರಾಪಚಿ, ಸೂರಣಗಿ |
| 13. | ಬಳ್ಳಾರಿ | ಹೊಸಪೇಟೆ | ಆರ ಡಿ ಸೆಂಟರ್, ಮೆಟ್ರಿ |
| 14. | ಕಲಬುರಗಿ | ಅಫ್ಜಲ್‌ಪುರ | ಪ್ರಾಪಚಿ, ಉಡಚಣ |
| 15. | ಕಲಬುರಗಿ | ಜೇವರ್ಗಿ | ಪ್ರಾಪಚಿ, ಹುಲ್ಲೂರ |
| 16. | ಹಾವೇರಿ | ಹಾನಗಲ್ | ಪ್ರಾಪಚಿ, ನರೇಗಲ್ |
| 17. | ಕೊಪ್ಪಳ | ಯಲಬುರ್ಗಾ | ಪ್ರಾಪಚಿ, ಬಳಗೇರಿ |
| 18. | ಬಳ್ಳಾರಿ | ಕೂಡ್ಲಿಗಿ | ಪ್ರಾಪಚಿ, ನಿಂಬಳಗೇರಿ |
| 19. | ಬಳ್ಳಾರಿ | ಹೊಸಪೇಟೆ | ಕೃ.ಗ.ಉಕೇಂ, ನಾಗೇನಹಳ್ಳಿ |
| 20. | ಶಿವಮೊಗ್ಗ | ಭದ್ರಾವತಿ | ಪ್ರಾಪಚಿ, ಅರಳಿಹಳ್ಳಿ |
| 21. | ಉತ್ತರ ಕನ್ನಡ | ಮುಂಡಗೋಡ | ಪ್ರಾಪಚಿ, ಚೌಡಳ್ಳಿ |
| 22. | ಉತ್ತರ ಕನ್ನಡ | ಯಲ್ಲಾಪುರ | ಕೃ.ಗ.ಕೇಂ, ದೇಹಳ್ಳಿ |

**ಹೆಚ್. ಪ್ರಸನ್ನ**
ಪೀಠಾಧಿಕಾರಿ–2,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,(ಪಶುಸಂಗೋಪನೆ–ಎ)

PR. 297
SC. 100

## ಸಹಕಾರ ಸಚಿವಾಲಯ

**ವಿಷಯ:** ಅರ್ಥ್ ಮೂವರ್ಸ್ ಕಾರ್ಮಿಕರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಕೋಲಾರ ಇದರ 2008–09 ರಿಂದ 2012–13 ನೇ ಸಾಲಿನ ಲೆಕ್ಕ ಪರಿಶೋಧನೆಯನ್ನು ಮರು ಲೆಕ್ಕಪರಿಶೋಧನೆಗೆ ಮಾಡುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ:ತಪಫ/ಬೆಂವಿಕೋ/25/2014–15/7157, ದಿ: 3–1–2015

**ಪ್ರಸ್ತಾವನೆ :**

ಮೇಲೆ ಓದಲಾದ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರ ಪ್ರಸ್ತಾವೆಯಲ್ಲಿ ಅರ್ಥ್ ಮೂವರ್ಸ್ ಕಾರ್ಮಿಕರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಕೋಲಾರ ಇದರ 2008–09 ರಿಂದ 2012–13ನೇ ಸಾಲಿನ ಲೆಕ್ಕಪರಿಶೋಧನೆಯನ್ನು ಈ ಕೆಳಕಂಡ ಲೋಪದೋಷಗಳನ್ನು ಗುರುತಿಸಿ ಮರುಲೆಕ್ಕಪರಿಶೋಧನೆಗೆ ಒಳಪಡಿಸಲು ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

1) ಸಂಘವು 2008–09 ರಿಂದ 2012–13 ರ ಅವಧಿಯ ಲೆಕ್ಕಪರಿಶೋಧನೆಯನ್ನು ಕೇವಲ ಒಂದೇ ದಿನದಲ್ಲಿ ಪ್ರಾರಂಭಿಸಿ ಮುಂದುವರೆಸಿ, ಮುಕ್ತಾಯಗೊಳಿಸಿರುವುದನ್ನು ಗಮನಿಸಿದರೆ ಇವರು ಸಂಘದ ಲೆಕ್ಕಪುಸ್ತಕ/ದಾಖಲೆಗಳನ್ನು ಸರಿಯಾದ ರೀತಿಯಲ್ಲಿ ಪರಿಶೀಲಿಸಿರುವುದು ಅನುಮಾನಾಸ್ಪದವಾಗಿರುತ್ತದೆ.

2) ಸದಸ್ಯರಿಂದ ಪಾವತಿಯಾದ ಷೇರು ಧನದ ಮೊಬಲಗು ದಿನಾಂಕ:31–03–2013ರ ಅಂತ್ಯಕ್ಕೆ ರೂ 4,86,000–00 ಗಳಿರುತ್ತವೆ. ಷೇರು ಧನದ ಕುಳುವಾರು ತಃಖ್ತೆ ಹಾಜರುಪಡಿಸಿರುವುದಿಲ್ಲ ಹಾಗೂ ಕುಳುವಾರು ಪಟ್ಟಿಯ ಒಟ್ಟು ಮೊಬಲಗನ್ನು ನಮೂದಿಸಿರುವುದಿಲ್ಲ. ಈ ಬಗ್ಗೆ ಹಿರಿಯ ಲೆಕ್ಕಪರಿಶೋಧಕರು ಯಾವುದೇ ವಿಶ್ಲೇಷಣೆ ಮಾಡಿರುವುದಿಲ್ಲ.

3) ದಿನಾಂಕ:31-03-2013ರ ಅಂತ್ಯಕ್ಕೆ ಸದಸ್ಯರ ನಿರಖು ಠೇವಣಿ ರೂ 6,14,000/- ಗಳಿದ್ದು ಮುಂಗಡ ಖಾತೆಗಳನ್ನು ನಿರ್ವಹಿಸಿರುವ ಬಗ್ಗೆ ನಮೂದಿಸಿರುತ್ತಾರೆ. ಆದರೆ ಈ ಸಂಬಂಧ ಕುಳುವಾರು ಪರಿಶೀಲನೆ ಬಗ್ಗೆ ಯಾವುದೇ ವ್ಯಾಖ್ಯಾನವನ್ನು / ವಿಶ್ಲೇಷಣೆಯನ್ನು ನೀಡಿರುವುದಿಲ್ಲ.

4) ಆಸ್ತಿ ಜವಾಬ್ದಾರಿ ತಃಖ್ತೆ ರೀತ್ಯಾ ದಿನಾಂಕ:31-03-2013 ರ ಅಂತ್ಯಕ್ಕೆ ರೂ 27,00,000/- ಮುಂಗಡವಿದ್ದು, ವರದಿ ಪುಟ-20ರಲ್ಲಿ ಕೇವಲ ಅಗತ್ಯತೆಗನುಸಾರವಾಗಿ ಅರ್ಜುನ್‌ರವರಿಂದ ಪಡೆದಿರುವ ಮುಂಗಡವೆಂದು ನಮೂದಿಸಿದ್ದು, ಖಾಸಗಿ ವ್ಯಕ್ತಿಯೊಬ್ಬರಿಂದ ಬೈಲಾ ವಿರುದ್ಧವಾಗಿ ಆಡಳಿತ ಮಂಡಳಿ ನಿರ್ದೇಶಕರ ಗಮನಕ್ಕೆ ತಾರದೆ ನಡಸಿರುವ ವ್ಯವಹಾರದ ಬಗ್ಗೆ ಸೂಕ್ತ ರೀತಿಯಲ್ಲಿ ವಿಶ್ಲೇಷಿಸಿರುವುದಿಲ್ಲ.

5) ದಿನಾಂಕ:31-03-2013ರ ಅಂತ್ಯಕ್ಕೆ ಜಮೀನು ಅಭಿವೃದ್ಧಿ ವೆಚ್ಚವೆಂದು 2010-11ಕ್ಕೆ ರೂ 10,61,960/- 2011-12ಕ್ಕೆ ರೂ 5,60,719/- ಗಳನ್ನು ಸೇರಿದಂತೆ ಒಟ್ಟು ರೂ 16,22,679/-ಗಳ ಖರ್ಚು ತೋರಿಸಿರುವ ಸಂಘದವರ ಕ್ರಮವನ್ನು ಆಕ್ಷೇಪಿಸಿ ಜವಾಬ್ದಾರಿಯೊಂದಿಗೆ ವಸೂಲಾತಿಗೆ ಸೂಚಿಸಿರುವುದಿಲ್ಲ.

6) ಬಿ.ಇ.ಎಂ.ಎಲ್. ಕಾರ್ಮಿಕರ ಪತ್ತಿನ ಸಹಕಾರ ಸಂಘವು ಇದ್ದು, ಸಂಘದ ಸದಸ್ಯರಿಂದ ವಸೂಲಾದ ಸಾಲದ ಮೊಬಲಗಿನ ಚೆಕ್‌ನ್ನು ಈ ಗೃಹ ನಿರ್ಮಾಣ ಸಹಕಾರ ಸಂಘದ ಲೆಕ್ಕಪುಸ್ತಕಗಳಲ್ಲಿ ಅಳವಡಿಸುತ್ತಿರುವ ಕ್ರಮವನ್ನು ಆಕ್ಷೇಪಿಸಿರುವುದಿಲ್ಲ. ಈ ಬಾಬ್ತು 2008-09 ರಿಂದ 2011-12ರ ಅವಧಿಯಲ್ಲಿ ಜರುಗಿದೆ ಎಂದು ಆಪಾದಿಸಲಾಗಿರುವ ಮೊಬಲಗು ಒಟ್ಟು ರೂ 14,93,551/- ಗಳ ಬಗ್ಗೆ ಸೂಕ್ತ ರೀತಿಯಲ್ಲಿ ವಿಮರ್ಶಿಸಿರುವುದಿಲ್ಲ. ಹಾಗೂ 2008-09 ನೇ ಸಾಲಿನಿಂದಲೂ ಸಹ ನಿರಂತರವಾಗಿ ಬಿ.ಇ.ಎಂ.ಎಲ್. ಪತ್ತಿನ ಸಹಕಾರ ಸಂಘದೊಂದಿಗೆ ವ್ಯವಹಾರ ನಡೆಸುತ್ತಾ ಬಂದಿದ್ದರೂ ಸಹ ಈ ಬಗ್ಗೆ ತಮ್ಮ ವರದಿಯಲ್ಲಿ ಆಕ್ಷೇಪಿಸಿ ಸೂಕ್ತ ಜವಾಬ್ದಾರಿಯೊಂದಿಗೆ ವಿಶ್ಲೇಷಿಸಿರುವುದಿಲ್ಲ.

7) ಗೌರವ ಕಾರ್ಯದರ್ಶಿಯನ್ನು ಹೊರತುಪಡಿಸಿ ಸಂಘದಲ್ಲಿ ಯಾವುದೇ ಸಿಬ್ಬಂದಿ ಕಾರ್ಯನಿರ್ವಹಿಸದೆ ಇದ್ದರೂ ಸಹ 2008-09 ರಿಂದ 2012-13 ರ ಅವಧಿಯಲ್ಲಿ ಒಟ್ಟು ರೂ 1,77,000/- ಗಳನ್ನು ಖರ್ಚು ಹಾಕಿರುವುದನ್ನು ಆಕ್ಷೇಪಿಸಿ ವಸೂಲಾತಿಗೆ ಸೂಚಿಸಿರುವುದಿಲ್ಲ. ಅಲ್ಲದೇ ವರದಿ ಪುಟ 18ರ ಸಿಬ್ಬಂದಿ ಶೀರ್ಷಿಕೆಯಡಿಯಲ್ಲಿ ಶ್ರೀ ಎಂ. ವೆಂಕಟೇಗೌಡ, ಗೌರವ ಕಾರ್ಯದರ್ಶಿ ಮತ್ತು ಶ್ರೀ . . . . . . . . . . . . . .. . . . .ಗುಮಾಸ್ತೆ ಎಂದು ನಮೂದಿಸಿರುತ್ತಾರೆ.

8) ಗೌರವ ಕಾರ್ಯದರ್ಶಿಯಾದ ಶ್ರೀ ಎಂ. ವೆಂಕಟೇಗೌಡ ಇವರು ಕಾರ್ಮಿಕರ ಪತ್ತಿನ ಸಹಕಾರ ಸಂಘದಲ್ಲಿಯೂ ಸಹ ಗೌರವ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದು, ಹಿಂದಿನ ಸಾಲುಗಳಲ್ಲಿ ಪತ್ತಿನ ಸಹಕಾರ ಸಂಘದಿಂದ ಕಾನೂನು ಬಾಹಿರವಾಗಿ ಪಡೆದಿರುವ ರೂ 1,18,50,778/- ಅಸಲು ಮತ್ತು ಬಡ್ಡಿ ರೂ 97,72,812/- ಗಳ ಪೈಕಿ ರೂ 62,24,032/-ಗಳನ್ನು ಪಾವತಿ ಮಾಡಲಾಗಿದ್ದು, ಈ ಬಗ್ಗೆ ನಿಯಮಗಳಡಿಯಲ್ಲಿ ಇರುವ ಅವಕಾಶಗಳೊಂದಿಗೆ ವಿಶ್ಲೇಷಿಸಿರುವುದಿಲ್ಲ.

9) 2011-12 ಮತ್ತು 2012-13 ನೇ ಸಾಲಿನಲ್ಲಿ ವಸುಧಾ ಡೆವಲಪರ್ಸ್‌ಗೆ 3ನೇ ಹಂತದ ಜಮೀನು ಅಭಿವೃದ್ಧಿಗಾಗಿ ಪಾವತಿಸಲಾಗಿರುವ ರೂ 1,74,50,000/- ಗಳನ್ನು ನಿಯಮಬಾಹಿರವಾಗಿ ಪಾವತಿಸಿರುವುದನ್ನು ದುರುಪಯೋಗ ಶೀರ್ಷಿಕೆಯಡಿ ಜವಾಬ್ದಾರಿ ನಿಗದಿಪಡಿಸುವುದರೊಂದಿಗೆ ಆಕ್ಷೇಪಿಸಿರುವುದಿಲ್ಲ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 10 ಸಿಎಲ್‌ಎಂ 2015, ಬೆಂಗಳೂರು, ದಿನಾಂಕ: 03-03-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅರ್ಥ್ ಮೂವರ್ಸ್ ಕಾರ್ಮಿಕರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಕೋಲಾರ ಇದರ 2008-09 ರಿಂದ 2012-13 ರ ಸಾಲಿನ ಪರಿಶೋಧಿತ ಲೆಕ್ಕಪತ್ರಗಳನ್ನು **ಶ್ರೀ ಪಿ.ಸಿ. ಶ್ರೀನಿವಾಸ, ಲೆಕ್ಕಪರಿಶೋಧಕರು, ಹಿರಿಯ ಲೆಕ್ಕ ಪರಿಶೋಧಕರ ಕಛೇರಿ ಮಾಲೂರು ಇವರನ್ನು ನಿಯೋಜಿಸಿ** ಪುನರ್ ಲೆಕ್ಕಪರಿಶೋಧನೆ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959, ಕಲಂ 63 (13) ರೀತ್ಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

PR. 190
SC. 50

## ಕಂದಾಯ ಸಚಿವಾಲಯ

**ವಿಷಯ:–** ಶ್ರೀ ವ್ಯಾಸರಾಜ ಮಠದ (ಸೋಸಲೆ) ಇಲ್ಲಿನ ಆಡಳಿತಾಧಿಕಾರಿಯ ಅವಧಿಯನ್ನು ಮುಂದುವರೆಸುವ ಬಗ್ಗೆ

**ಓದಲಾಗಿದೆ:–**
(1) ಸರ್ಕಾರದ ಆದೇಶ ಸಂಖ್ಯೆ:ಕಂಇ 67 ಮುದಾಪ್ರ 2002 ದಿನಾಂಕ:26.05.2012
(2) ಸರ್ಕಾರದ ಆದೇಶ ಸಂಖ್ಯೆ:ಕಂಇ 34 ಮುಸೇವಿ 2014 ದಿನಾಂಕ:24.05.2014
(3) ಆಡಳಿತಾಧಿಕಾರಿ, ಶ್ರೀ ವ್ಯಾಸರಾಜ ಮಠ (ಸೋಸಲೆ) ಇವರ ಪತ್ರ ಸಂಖ್ಯೆ:ಆ/ 22/ ಶ್ರೀವ್ಯಾಸೋಮ/ 2012(ಭಾ) ದಿನಾಂಕ:16.04.2015
(4) ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ:ಎಡಿಎಂ/07/ಡಬ್ಲ್ಯೂಪಿ/37/2001–02 ದಿನಾಂಕ:07.05.2015

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಶ್ರೀ ವ್ಯಾಸರಾಜ (ಸೋಸಲೆ) ಮಠದ ಸಮಸ್ತ ಆಸ್ತಿಗಳನ್ನು ಹಾಗೂ ದೇಶದ ವಿವಿಧ ಭಾಗಗಳಲ್ಲಿರುವ ಶ್ರೀ ಮಠದ ಶಾಖೆಗಳ ಆಡಳಿತವನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡು ಆಡಳಿತ ನಿರ್ವಹಣೆ ನಡೆಸಲು, ಆಡಳಿತಾಧಿಕಾರಿ ನೇಮಿಸಲು ಸರ್ಕಾರವು ನಿರ್ಧರಿಸಿ ಶ್ರೀ ಕೆ. ಜೈರಾಜ್ ಭಾ.ಆ.ಸೇ., (ನಿವೃತ್ತ) ಅಂದಿನ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು ಇವರನ್ನು ಆಡಳಿತಾಧಿಕಾರಿಯನ್ನಾಗಿ ದಿನಾಂಕ:26.05.2012ರಿಂದ ಎರಡು ವರ್ಷಗಳ ಅವಧಿಗೆ ನೇಮಕ ಮಾಡಿ ಆದೇಶಿಸಲಾಗಿತ್ತು. ಇದರ ಜೊತೆಗೆ ಸರ್ಕಾರವು ಆಡಳಿತಾಧಿಕಾರಿಗೆ ಸೂಕ್ತ ಮಾರ್ಗದರ್ಶನ ನೀಡಲು ಭಾರತದ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಶ್ರೀ ಎಂ.ಎನ್. ವೆಂಕಟಾಚಲಯ್ಯ, ಕರ್ನಾಟಕ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯ ಮೂರ್ತಿಗಳಾದ ಶ್ರೀ ಎಸ್.ಆರ್. ವೆಂಕಟೇಶಮೂರ್ತಿ ಹಾಗೂ ಇತರ ಗಣ್ಯರನ್ನೊಳಗೊಂಡಂತೆ ಒಂದು ಸಲಹಾ ಸಮಿತಿಯನ್ನು ರಚಿಸಲಾಗಿತ್ತು. ಅದರಂತೆ ಓದಲಾದ (1)ರ ಸರ್ಕಾರದ ಆದೇಶದನ್ವಯ ಸದರಿ ಆಡಳಿತಾಧಿಕಾರಿಯು ದಿನಾಂಕ:26.05.2012ರಂದು ಶ್ರೀಮಠದ ಅಧಿಕಾರವನ್ನು ವಹಿಸಿಕೊಂಡಿರುತ್ತಾರೆ. ತರುವಾಯ, ಸದರಿ ಆಡಳಿತಾಧಿಕಾರಿಯ ಅಧಿಕಾರ ಅವಧಿಯನ್ನು ಸರ್ಕಾರವು ಮೇಲೆ ಓದಲಾದ (2)ರ ಸರ್ಕಾರದ ಆದೇಶ ದಿನಾಂಕ:24.05.2014ರಲ್ಲಿ ಒಂದು ವರ್ಷದ ಅವಧಿಗೆ ಮುಂದುವರೆಸಿ, ಆದೇಶಿಸಲಾಗಿತ್ತು.

ಮೇಲೆ ಓದಲಾದ (3)ರಲ್ಲಿ ಆಡಳಿತಾಧಿಕಾರಿ, ಶ್ರೀ ವ್ಯಾಸರಾಜ ಮಠ (ಸೋಸಲೆ) ಇವರ ಪತ್ರದಲ್ಲಿ ಆಡಳಿತಾಧಿಕಾರಿಯು ಮಠವನ್ನು ವಶಕ್ಕೆ ವಹಿಸಿಕೊಂಡ ನಂತರ ಶ್ರೀಮಠದ ಆಡಳಿತದಲ್ಲಿ ಪಾರದರ್ಶಕತೆ, ಉದ್ದೇಶಿತ ಗುರಿ ಹಾಗೂ ಅನ್ವಯತೆಯನ್ನಾಧರಿಸಿ ಅತ್ಯುನ್ನತ ಮಟ್ಟದ ಮಾದರಿಯಲ್ಲಿ ಸುಧಾರಣೆಗಳನ್ನು ತಂದಿದ್ದು, ಹಣಕಾಸು ನಿರ್ವಹಣೆಯಲ್ಲಿ ಆದಾಯ ಕ್ರೋಢೀಕರಣ ಹಾಗೂ ವೆಚ್ಚಗಳ ಕುರಿತು ಕಟ್ಟುನಿಟ್ಟಿನ ಕ್ರಮ ತೆಗೆದುಕೊಳ್ಳಲಾಗಿಯೆಂದು, ಪೀಠಾಧಿಪತಿಗಳು ಇತರರಿಗೆ ಅನಧಿಕೃತವಾಗಿ ಪರಭಾರೆ ಮಾಡಿರುವ ಎಲ್ಲಾ ಆಸ್ತಿಗಳನ್ನು ಹಿಂಪಡೆಯಲು ಕ್ರಮ ಹಾಗೂ ಮಠದ ಉಳಿದ ಕಾಮಗಾರಿಗಳ ತುರ್ತು ನಿರ್ವಹಣೆ, ಜೀರ್ಣೋದ್ಧಾರ ಹಾಗೂ ನವೀಕರಣ ಕಾರ್ಯಗಳನ್ನು ಕೈಗೊಳ್ಳಬೇಕಾಗಿದೆ ಎಂದು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ. ಮುಂದುವರೆದು ಆಡಳಿತಾಧಿಕಾರಿಯು ಅಧಿಕಾರ ವಹಿಸಿಕೊಂಡ ನಂತರ ದಿನಾಂಕ:31.03.2015ರವರೆಗೆ ₹.1.95 ಕೋಟಿಗಳಷ್ಟು ಉಳಿತಾಯ ಮಾಡಲಾಗಿಯೆಂದು, ಇದು ಅವರ ನಿಯಂತ್ರಣಕ್ಕೆ ಒಳಪಟ್ಟಿರುವ ಶೇ.50ಕ್ಕಿಂತಲೂ ಕಡಿಮೆ ಶಾಖೆಗಳಿಂದ ಬಂದ ವರಮಾನವಾಗಿರುತ್ತದೆಂದು ಸಹ ವರದಿ ಮಾಡಿರುತ್ತಾರೆ. ಮುಂದುವರೆದು, ಶ್ರೀಮಠದಲ್ಲಿ ಮುಂದಿನ ದಿನಗಳಲ್ಲಿ ತುರ್ತಾಗಿ ನಿರ್ವಹಿಸಬೇಕಾಗಿರುವ ಕೆಲಸಗಳು ಸಾಕಷ್ಟು ಉಳಿದಿವೆ ಎಂದು, 53 ಶಾಖೆಗಳ ಪೈಕಿ 29 ಶಾಖೆಗಳನ್ನು ತಮ್ಮ ಸ್ವಾಧೀನಕ್ಕೆ ಮರಳಿ ಪಡೆಯಬೇಕೆಂದು, ಪೀಠಾಧಿಪತಿಗಳು ಮತ್ತು ಅವರ ಸಹಚರರು ನ್ಯಾಯಾಲಯಗಳಲ್ಲಿ ಹೂಡಿರುವ ದಾವೆಗಳನ್ನು ಸಮರ್ಥವಾಗಿ ಎದುರಿಸಲು, ಮೂಲ ಸಂಸ್ಥಾನದಿಂದ ಕಾಣೆಯಾಗಿರುವ ಅತ್ಯಮೂಲ್ಯ ಆಭರಣಗಳ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲು ಹಾಗೂ ಶಿಥಿಲಾವಸ್ಥೆಯಲ್ಲಿರುವ ಶ್ರೀಮಠದ ಕಟ್ಟಡಗಳ ಜೀರ್ಣೋದ್ಧಾರ ಮತ್ತು ನವೀಕರಣ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುವುದರಿಂದ ಮತ್ತು ಆಡಳಿತಾಧಿಕಾರಿಯ ಅವಧಿಯು ದಿನಾಂಕ:25.05.2015ರಂದು ಮುಕ್ತಾಯಗೊಳ್ಳುವ ಹಿನ್ನೆಲೆಯಲ್ಲಿ ಶ್ರೀಮಠದ ಆಡಳಿತಾಧಿಕಾರಿಯ ಅವಧಿಯನ್ನು ಮುಂದಿನ ಎರಡು ವರ್ಷಗಳ ಅವಧಿಗೆ ವಿಸ್ತರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (4)ರ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ ಶ್ರೀಮಠವನ್ನು ಪುನಃ ಸುಸ್ಥಿತಿಗೆ ತರಲು ಮತ್ತು ಸಮಗ್ರ ಆಡಳಿತ ನಿರ್ವಹಣೆ ಮಾಡಲು ಹಾಗೂ ಭಕ್ತಾದಿಗಳ ಹಿತಾಸಕ್ತಿ ಮತ್ತು ಶ್ರೀಮಠದ ಸ್ವತ್ತುಗಳನ್ನು ಗಮನದಲ್ಲಿಟ್ಟುಕೊಂಡು ಕೆಲವು ತುರ್ತು ಕ್ರಮಗಳನ್ನು ಕೈಗೊಳ್ಳಬೇಕಾಗಿರುವ ಕಾರಣ ಆಡಳಿತಾಧಿಕಾರಿ ಇವರ ಅಧಿಕಾರದ ಅವಧಿಯನ್ನು ಮುಂದಿನ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಅತ್ಯವಶ್ಯಕವಾಗಿದೆಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 34 ಮುಸೇವಿ 2014, ಬೆಂಗಳೂರು; ದಿನಾಂಕ: 21ನೇ ಮೇ, 2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, 2012ರಲ್ಲಿ ಯಾವ ಉದ್ದೇಶಕ್ಕಾಗಿ ಶ್ರೀಮಠದ ಆಡಳಿತಾಧಿಕಾರವನ್ನು ಸರ್ಕಾರವು ವಹಿಸಿಕೊಂಡಿತ್ತೋ ಆ ಉದ್ದೇಶವನ್ನು ಇನ್ನೂ ಸಾಧಿಸಬೇಕಾಗಿರುವುದರಿಂದ ಆಡಳಿತಾಧಿಕಾರಿಗೆ ಹೆಚ್ಚಿನ ಕಾಲಾವಕಾಶ ನೀಡುವುದು ಅವಶ್ಯಕವಾಗಿರುವ ಹಿನ್ನೆಲೆಯಲ್ಲಿ ಶ್ರೀ ಕೆ. ಜೈರಾಜ್, ಭಾ.ಆ.ಸೇ., (ನಿವೃತ್ತ) ಆಡಳಿತಾಧಿಕಾರಿ, ಶ್ರೀ ವ್ಯಾಸರಾಜ ಮಠ (ಸೋಸಲೆ) ಇವರ ಆಡಳಿತದ ಅವಧಿಯನ್ನು ದಿನಾಂಕ:26.05.2015ರಿಂದ ಒಂದು ವರ್ಷದ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಟಿ. ಜಯರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

## REVENUE SECRETARIAT

**Subject:** Continuation of the term of the Office of the Administrator, Sri Vyasaraja Mutt (Sosale).

**Reference:**
(1) Government Order No.RD 67 MUDAPRA 2002 dated:26.05.2012
(2) Government Order No.RD 34 MUSEV 2014 dated:25.05.2014
(3) Administrator, Sri Vyasaraja Mutt (Sosale) letter No.ADM/22/SVM/2012(P) dated:16.04.2015
(4) Commissioner, The Religious and Charitable Institution Department, Bengaluru letter No.ADM/07/WP/37/2001-02 dated:07.05.2015

**Preamble:-**

Government of Karnataka in its Order at reference (1) had ordered to take over management and properties with all assets, both moveable and immovable, records, accounts, funds of Sri Vyasaraja Mutt (Sosale) and all its attendant branches and properties located in various parts of the Country for an initial period of 2 years for the reasons outlined in the said Government Order. It had appointed Sri K.Jairaj, IAS., (now Retd.), the then Additional Chief Secretary to Government of Karnataka, as Administrator, to manage the affairs of the Mutt. The Government of Karnataka had also appointed an Advisory Committee consisting of eminent personalities namely, Justice M.N.Venkatachalaiah, former Chief Justice of India, Justice S.R.Venkatesha Murthy, former Judge, High Court of Karnataka and others. The Administrator accordingly took charge of the affairs of the Mutt on 26.5.2012. Subsequently, the term of the Administrator was extended for a further period of 1 year vide Government Order at reference (2).

The Administrator in his report vide reference (3) above has reported that, after takeover of the administration by him, he has initiated several steps for restoration of the confidence of the devotees by taking stringent measures and ensuring proper objective accounting of all revenues and strict control over expenditure; steps to get back all properties which are alienated by the Peethadhipathi; taking up renovation and modernization works of several branch mutt's and bringing in a total transparency and objectivity in dealing with all the matters of the Mutt. The Administrator has reported a total surplus of ₹.1.95 Crores as on 31.3.2015. This is in respect of less than 50% of the branches taken over by him.

The Administrator has further reported that the term of the Administrator will conclude on 25.5.2015 and that there are several urgent works required to be taken up in coming months. These include taking back possession of the remaining 29 branches out of 53 branches. Pursuing with the Court cases filed by the Peethadhipathi and Associates. Pursuing complaints on missing of precious jewelleries of the Moola samsthana Mutt, reclaiming properties illegally alienated and taking up renovation and modernization of Mutt branches which are in dilapidated condition. The Administrator has requested the Government to issue Government Order to extend the term of the office for a further period to 2 years.

The Endowment Commissioner in their proposal vide reference (4) above has recommended the Government to extend the term of office of the Administrator for 2 more years as several steps have to be taken to improve comprehensive Administrative Management, to get back the properties of the Mutt and to restore the confidence of the devotees.

In this back ground Government has examined the proposal of the Endowment Commissioner in detail and the following orders have been issued.

**Government Order No.RD 34 MUSEV 2014; Bengaluru, dated: 21th May, 2015**

In view of the circumstances outlined above and upon careful consideration of the matter to fulfil the objectives for which the administration was taken over in 2012, additional time needs to be provided to the Administrator to complete pressing and ongoing tasks mentioned above. For these reasons, Government hereby extend the term of Office of the Administrator, Sri Vyasaraja Mutt (Sosale), Sri K.Jairaj, IAS., for a further period of one year from 26.05.2015.

By Order and in the name of the Governor of Karnataka

**C.T.Jayaramegowda**
Under Secretary to Government
Revenue Department (Muzrai)

**PR. 338**
**SC. 25**

## ಸಹಕಾರ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರ ನೋಂದಾವಣಿ ಅವಧಿಯನ್ನು ವಿಸ್ತರಿಸುವ ಬಗ್ಗೆ

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಸಿಒ/79/ಸಿಎಲ್ಎಸ್/2015, ಬೆಂಗಳೂರು ದಿನಾಂಕ:19–03–2015.

**ಪ್ರಸ್ತಾವನೆ :**

2015–16ನೇ ಸಾಲಿನ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರ ನೋಂದಾವಣೆಗೆ ಮೇಲೆ ಓದಲಾದ ಸರ್ಕಾರಿ ಆದೇಶದಂತೆ ಜಾರಿಗೊಳಿಸಲಾಗಿದೆ. ದಿನಾಂಕ:22–05–2015ರವರೆಗೆ ಈ ಯೋಜನೆಯಲ್ಲಿ ಕೇವಲ 64,426 ಸದಸ್ಯರು ಮಾತ್ರ ನೋಂದಾವಣೆಯಾಗಿರುತ್ತಾರೆ. ಹೆಚ್ಚಿನ ಇಲಾಖಾಧಿಕಾರಿಗಳು ಮತ್ತು ಸಿಬ್ಬಂದಿಗಳು ಪಂಚಾಯಿತಿ ಚುನಾವಣೆಯಲ್ಲಿ ತೊಡಗಿಸಿಕೊಂಡಿರುವುದರಿಂದ ಈ ಯೋಜನೆಯ ನೋಂದಣಿಯಲ್ಲಿ

ಆಶಾದಾಯಕ ಪ್ರಗತಿ ಆಗಿರುವುದಿಲ್ಲ. ಈ ಯೋಜನೆಯ ನೋಂದಣಿ ಅವಧಿ ದಿನಾಂಕ: 31–05–2015ಕ್ಕೆ ಕೊನೆಗೊಳ್ಳುವುದರಿಂದ ಗ್ರಾಮೀಣ ಯಶಸ್ವಿನಿ ಯೋಜನೆಯಡಿ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ನೋಂದಾವಣೆ ಮಾಡುವ ದೃಷ್ಟಿಯಿಂದ ನೋಂದಣಿ ದಿನಾಂಕವನ್ನು ವಿಸ್ತರಿಸುವುದು ಅವಶ್ಯಕವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ/79/ಸಿಎಲ್ಎಸ್/2015, ಬೆಂಗಳೂರು, ದಿನಾಂಕ : 02–06–2015.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರ ನೋಂದಾವಣೆ ಅವಧಿಯಲ್ಲಿ ದಿನಾಂಕ:30–6–2015ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ

**P.R. 311**
**SC-250**

## ಸಹಕಾರ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರ ನೋಂದಾವಣಿ ಅವಧಿಯನ್ನು ವಿಸ್ತರಿಸುವ ಬಗ್ಗೆ

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಸಿಒ/80/ಸಿಎಲ್ಎಸ್/2015, ಬೆಂಗಳೂರು ದಿನಾಂಕ:19–03–2015.

**ಪ್ರಸ್ತಾವನೆ :**

2015–16ನೇ ಸಾಲಿನ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ಸದಸ್ಯರ ನೋಂದಾವಣೆಗೆ ಮೇಲೆ ಓದಲಾದ ಸರ್ಕಾರಿ ಆದೇಶದಂತೆ ಜಾರಿಗೊಳಿಸಲಾಗಿದೆ. ದಿನಾಂಕ:22–05–2015ರವರೆಗೆ ಈ ಯೋಜನೆಯಲ್ಲಿ ಕೇವಲ 2565 ಸದಸ್ಯರು ಮಾತ್ರ ನೋಂದಾವಣೆಯಾಗಿರುತ್ತಾರೆ. ಹೆಚ್ಚಿನ ಇಲಾಖಾಧಿಕಾರಿಗಳು ಮತ್ತು ಸಿಬ್ಬಂದಿಗಳು ಜನವರಿ 2015ರಿಂದ ಸಹಕಾರ ಸಂಘಗಳ ಚುನಾವಣೆಯಲ್ಲಿ ತೊಡಗಿದ್ದರಿಂದ ಈ ಯೋಜನೆಯ ನೋಂದಣಿಯಲ್ಲಿ ಆಶಾದಾಯಕ ಪ್ರಗತಿ ಆಗಿರುವುದಿಲ್ಲ. ಈ ಯೋಜನೆಯ ನೋಂದಣಿ ಅವಧಿ ದಿನಾಂಕ: 31–05–2015ಕ್ಕೆ ಕೊನೆಗೊಳ್ಳುವುದರಿಂದ ನಗರ ಯಶಸ್ವಿನಿ ಯೋಜನೆಯಡಿ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ನೋಂದಾವಣೆ ಮಾಡುವ ದೃಷ್ಟಿಯಿಂದ ನೋಂದಾವಣಿ ದಿನಾಂಕವನ್ನು ವಿಸ್ತರಿಸುವುದು ಅವಶ್ಯವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ/80/ಸಿಎಲ್ಎಸ್/2015, ಬೆಂಗಳೂರು, ದಿನಾಂಕ : 02–06–2015.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರ ನೋಂದಾವಣೆ ಅವಧಿಯಲ್ಲಿ ದಿನಾಂಕ:30–6–2015ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ

**P.R. 312**
**SC-250**

## ಸಹಕಾರ ಸಚಿವಾಲಯ

**ವಿಷಯ :** ಕೃಷ್ಣಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ ಇದರ 2013–14ನೇ ಸಾಲಿನ ಲೆಕ್ಕಪರಿಶೋಧಿತ ವರದಿಗಳನ್ನು ಮರುಪರಿಶೀಲನೆಗೆ ಒಳಪಡಿಸುವ ಕುರಿತು.

**ಓದಲಾಗಿದೆ :** ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಪತ್ರ ಸಂಖ್ಯೆ: ತಪಫ/ಬೆಂವಿರಾ/37/2014–15, ದಿನಾಂಕ: 02–03–2015.

**ಪ್ರಸ್ತಾವನೆ :**

ಮೇಲೆ ಓದಲಾದ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರ ಪತ್ರದಲ್ಲಿ ಕೃಷ್ಣಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ ಇದರ 2013–14ನೇ ಸಾಲಿನ ಹಾಗೂ ಹಿಂದಿನ 7 ವರ್ಷಗಳ ಅಡಿಟ್ ವರದಿಯನ್ನು ಮರುಲೆಕ್ಕಪರಿಶೋಧನೆಗೆ ಒಳಪಡಿಸುವಂತೆ ದೂರುಗಳು ಬಂದಿದ್ದು, ಈ ಬಗ್ಗೆ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪನಿರ್ದೇಶಕರು, ರಾಮನಗರ ಜಿಲ್ಲೆ, ರಾಮನಗರ ಇವರು ಪರಿಶೀಲಿಸಿ, ಈ ಕೆಳಕಂಡಂತೆ ಲೋಪದೋಷಗಳನ್ನು ಗುರುತಿಸಿ ಮರುಲೆಕ್ಕಪರಿಶೋಧನೆಗೆ ಒಳಪಡಿಸುವುದು ಸೂಕ್ತವೆಂದು ಅಭಿಪ್ರಾಯ ನೀಡಿರುವುದಾಗಿ ಲೆಕ್ಕಪರಿಶೋಧನಾ ನಿರ್ದೇಶಕರು ವರದಿ ಮಾಡಿರುತ್ತಾರೆ.

1) ಸಂಘದ 2013–14ನೇ ಸಾಲಿನ ಖರೀದಿ ಪುಸ್ತಕ ಹಾಗೂ ನಗದು ಪುಸ್ತಕದ ಪ್ರಕಾರ ಸಂಘವು ರೂ. 2,38,62,839.06ಗಳ ಹಾಲನ್ನು ಉತ್ಪಾದಕರಿಂದ ಖರೀದಿಸಲಾಗಿರುವುದಾಗಿ ಲೆಕ್ಕಪರಿಶೋಧಕರು ದೃಢೀಕರಿಸಿರುವ ಜಮಾ–ಖರ್ಚು ತಃಖ್ತೆಯಲ್ಲಿ ರೂ. 2,41,62,839.06 ಗಳ ಹಾಲು ಖರೀದಿಸಲಾಗಿದೆ ಎಂದು ದಾಖಲಿಸಿದ್ದು, ರೂ. 3,00,000–00ಗಳ ವ್ಯತ್ಯಾಸ ಕಂಡು ಬಂದಿರುತ್ತದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



2) ಸಂಘದ 2013–14ನೇ ಸಾಲಿನ ನಗದು ಪುಸ್ತಕದಂತೆ ರೂ. 17,31,080–00ಗಳ ಪಶು ಆಹಾರ ಮಾರಾಟದಿಂದ ಜಮಾ ಬಂದಿರುತ್ತದೆ. ಆದರೆ ಲೆಕ್ಕಪರಿಶೋಧಕರು ಸಲ್ಲಿಸಿರುವ ಜಮಾ ಖರ್ಚು ತಃಖ್ತೆಯಲ್ಲಿ ರೂ. 23,79,591–00ಗಳ ಪಶು ಆಹಾರ ಮಾರಾಟ ಜಮಾ ಎಂದು ದಾಖಲಿಸಿರುತ್ತಾರೆ. ಪಶು ಆಹಾರ ಮಾರಾಟದಲ್ಲಿ ರೂ. 6,48,511–00ಗಳ ವ್ಯತ್ಯಾಸ ಕಂಡು ಬಂದಿರುತ್ತದೆ.

3) ಸಂಘದ 2013–14ನೇ ಸಾಲಿನ ನಗದು ಪುಸ್ತಕದಂತೆ ಮಿನಿರಲ್ ಮಿಕ್ಸರ್, ವೆಟ್‌ಪೆನ್ ಮಾರಾಟ, ಗೋದಾರ ಶಕ್ತಿ ಮಾರಾಟ, ಜೋಳ ಮಾರಾಟ ಹಾಗೂ ಕೂಫನ್ ಮಾರಾಟವಾದ ಬಗ್ಗೆ ಯಾವುದೇ ಮೊಬಲಗು ಸಂಘಕ್ಕೆ ಜಮಾವಾಗಿರುವುದಿಲ್ಲ. ಆದರೆ ಲೆಕ್ಕಪರಿಶೋಧಕರು, ಸಲ್ಲಿಸಿರುವ ವರದಿಯ ಜಮಾ ಖರ್ಚು ತಃಖ್ತೆಯಲ್ಲಿ ಸದರಿ ಬಾಬ್ತುಗಳು ಮಾರಾಟದಿಂದ ಜಮಾ ಬಂದಿರುವುದಾಗಿ ದಾಖಲಿಸಿರುತ್ತಾರೆ.

4) ಸಂಘದ 2013–14ನೇ ಸಾಲಿನ ನಗದು ಪುಸ್ತಕದಂತೆ ವರದಿಯಲ್ಲಿ ಜನಶ್ರೀ ವಿಮೆ ಹಾಗೂ ಎಸ್.ಸಿ/ಎಸ್.ಟಿ ಹಸು ಸಾಲಿನ ಬಾಬ್ತು ಯಾವುದೇ ಮೊಬಲಗು ಸಂಘಕ್ಕೆ ಜಮಾ ಆಗಿರುವುದಿಲ್ಲ. ಆದರೆ ಲೆಕ್ಕಪರಿಶೋಧಕರು ಸಲ್ಲಿಸಿರುವ ಜಮಾ–ಖರ್ಚು ತಃಖ್ತೆಯಲ್ಲಿ ಜನಶ್ರೀ ವಿಮೆ ರೂ. 18,200–00 ಹಾಗೂ ಎಸ್.ಸಿ. / ಎಸ್.ಟಿ. ಸದಸ್ಯರ ಹಸು ಸಾಲ ರೂ. 14,222–00ಗಳು ಜಮಾ ಖರೀದಿಸಿರುವುದಾಗಿ ತಿಳಿಸಿರುತ್ತಾರೆ.

5) ಕಾರ್ಯದರ್ಶಿ ಮುಂಗಡ–ನಗದು ಪುಸ್ತಕದ ಪ್ರಕಾರ ರೂ.12,30,850–00ಗಳು ಸಂಘಕ್ಕೆ ಜಮಾ ಬಂದಿರುತ್ತದೆ. ರೂ. 9,80,350–00 ಗಳನ್ನು ಕಾರ್ಯದರ್ಶಿಯವರು ವಾಪಸ್ಸು ಪಡೆದಿರುತ್ತಾರೆ. ಆದರೆ ಲೆಕ್ಕಪರಿಶೋಧಕರ ಜಮಾ–ಖರ್ಚು ತಃಖ್ತೆಯಲ್ಲಿ ಕಾರ್ಯದರ್ಶಿ ಮುಂಗಡ ರೂ. 12,94,440–00 ಗಳು ಜಮಾ ಆಗಿದೆ ಎಂದು ತಿಳಿಸಿರುತ್ತಾರೆ. ಕಾರ್ಯದರ್ಶಿ ಮುಂಗಡಕ್ಕೆ ರೂ. 63,590–00 ಗಳು ಹೆಚ್ಚಿನ ಜಮಾ ತೋರಿಸಿರುತ್ತಾರೆ.

6) ಸಂಘದ ಕಾರ್ಯದರ್ಶಿಯವರು ಪರಿಶೀಲನಾ ವೇಳೆ ದಿನಾಂಕ:11–10–2013ರಂದು 2009–10ನೇ ಸಾಲಿನ (01–04–2009 ರಿಂದ ದಿನಾಂಕ: 31–03–2010) ಸದಸ್ಯರ ಬೋನಸ್ ಷೇರು ಡಿವಿಡೆಂಡ್ ರೂ. 1,29,224–97 ಹಾಗೂ ಸಿಬ್ಬಂದಿ ಬೋನಸ್ ರೂ. 19,925–00ಗಳನ್ನು ವಿತರಿಸಿರುವ ಬಗ್ಗೆ ರಿಜಿಸ್ಟರ್‌ನ್ನು ಹಾಜರುಪಡಿಸಿರುತ್ತಾರೆ. ಆದರೆ ನಗದು ಪುಸ್ತಕದಲ್ಲಿ ಖಚು ಹಾಕಿರುವುದಿಲ್ಲ.

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸಂಘದಲ್ಲಿ ಲೆಕ್ಕ ಪರಿಶೋಧನೆಯಲ್ಲಿ ಆಗಿರುವ ಲೋಪದೋಷಗಳನ್ನು ಸರಿಪಡಿಸಲು 2013–14 ಸಾಲು ಸೇರಿದಂತೆ ಹಿಂದಿನ 7 ವರ್ಷಗಳ ಲೆಕ್ಕಪತ್ರಗಳನ್ನು ಪುನರ್ ಪರಿಶೋಧನೆ ನಡೆಸುವುದು ಸೂಕ್ತವೆಂದು ಭಾವಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 119 ಸಿಎಲ್‌ಎಂ 2015, ಬೆಂಗಳೂರು, ದಿನಾಂಕ: 28–05–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೃಷ್ಣಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ ಇದರ 2007–2008 ರಿಂದ 2013–14ರ ವರೆಗಿನ 7 ವರ್ಷಗಳ ಪರಿಶೋಧಿತ ಲೆಕ್ಕಪತ್ರಗಳನ್ನು **ಹಿರಿಯ ಲೆಕ್ಕಪರಿಶೋಧಕರು, ರಾಮನಗರ ಜಿಲ್ಲೆ, ರಾಮನಗರ** ಇವರನ್ನು ನಿಯೋಜಿಸಿ, ಪುನರ್ ಲೆಕ್ಕಪರಿಶೋಧನೆ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959, ಕಲಂ 63 (13) ರೀತ್ಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ, ಸಹಕಾರ ಇಲಾಖೆ

**P.R. 313**

**SC-50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59